

ಕರ್ನಾಟಕ

# ಸ್ಕೌಟ್ ಮತ್ತು ಗೈಡ್

KARNATAKA SCOUT & GUIDE

News Magazine

VOL.3 JUNE 2003 NO. 5


# Highest and Prestigious National Award 'SILVER ELEPHANT' Presented to Hon'ble Chief Minister of Karnataka




Photo Courtesy : Deccan Herald, Prajavani

**Shri T.N. Chaturvedi,** His Excellency the Governor of Karnataka & Patron of the Bharat Scouts and Guides, Karnataka presenting a Memento with the 'Silver-Elephant' National Award to **Shri S.M. Krishna,** Hon'ble Chief Minister of Karnataka and President, Bharat Scouts and Guides, Karnataka on 19th June 2003 at Raj Bhavan.. **Shri S.S. Mallikarjuna,** Hon'ble Minister of State for Youth Services and Sports and **Shri Kondajji B. Shanmukhappa,** State Chief Commissioner are also seen.




ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್

85 ವರ್ಷಗಳ ಪರಿಪೂರ್ಣ ಸೇವೆಯಲ್ಲಿ

**1917-2003**


ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

# His Excellency The Governor of Karnataka Honoured the National and State Awardees at Raj Bhavan




**Sri I.A. Kairanna**
Silver Elephant
Dakshina Kannada

Smt. Gurudevi receiving on behalf of her mother
**Late Vasanthibai Jigajini**
Silver Elephant
Bijapur

**Sri M.M. Londe**
Bar-To-Silver Star
Dharwad



**Sri K. Thimmaiah**
Silver Star
Raichur

**Smt Geetha Nataraj**
Silver Star
Bangalore

**Sri Mohamed Wasil**
Silver Star
Davanagere

**Sri K.R. Bhounsley**
Silver Star
Bangalore

**Smt C.A. Meenaxi**
Silver Star
Kodagu



**Smt N.H. Kamalakshamma**
Silver Star
Bangalore

**Smt Saroja V. Naidu**
NHQ-Fellow
Bangalore

**Sri H.R. Umesh Aradhya**
Best LA
Shimoga

**Sri Narasimhamurthy**
Best Open Unit
Bangalore North

**Sri Bindu Madhava Rao**
Veteran Scouter
Bangalore South



# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE


STATE MONTHLY NEWS MAGAZINE

Vol - 3 June - 2003 No.5




## ಪರಿವಿಡಿ



## SCOUTING / GUIDING FOR DEVELOPMENT

**Over 28 Million Scouts and Guides in over 216 Nations, Islands & Territories have such common principles as service to others, high moral ideals and duty to country.**

# ರಾಜ್ಯ ಮುಖ್ಯ ಆಯುಕ್ತರ ನುಡಿ

ಮಾನ್ಯರೆ,

ಶಾಲಾ-ಕಾಲೇಜುಗಳು ರಜೆಯ ನಂತರ ಪುನರಾರಂಭಗೊಂಡಿವೆ. ಸಂಸ್ಥೆಯ ಕಾರ್ಯಚಟುವಟಿಕೆಗಳೂ ಪ್ರಾರಂಭವಾಗಿವೆ. ಈಗಾಗಲೇ ಚಳುವಳಿಯ ವಿವಿಧ ಹಂತದ ತರಬೇತಿ ಪಡೆದ ಶಿಕ್ಷಕರು, ತಮ್ಮ ಶಾಲೆಗಳಲ್ಲಿ ಸಂಬಂಧಪಟ್ಟ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್ ದಳಗಳನ್ನು ತೆರೆದಿದ್ದಾರೆಂಬ ಭರವಸೆ ನನಗಿದೆ. ಈ ವಿಷಯದಲ್ಲಿ ಹೋದಬಾರಿ ನಾನು ಪ್ರಸ್ತಾಪಿಸಿದಂತೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಮಾನ್ಯ ಆಯುಕ್ತರು, ದಿನಾಂಕ 5-06-2003ರ ಸುತ್ತೋಲೆಯಲ್ಲಿ ಸಂಸ್ಥೆಯ ದಳಗಳ ಬೆಳವಣಿಗೆಗೆ ಅನುಕೂಲಕರವಾದ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಸರ್ಕಾರಿ ಆದೇಶ ನೀಡಿರುವುದು ತಮಗೆಲ್ಲಾ ಈಗಾಗಲೇ ತಲುಪಿದೆಯೆಂದು ನಂಬಿದ್ದೇನೆ. ಈ ಸಂಚಿಕೆಯಲ್ಲಿ ಸುತ್ತೋಲೆಯ ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಪ್ರಕಟಿಸಲಾಗಿದೆ.

ದಿನಾಂಕ 19.06.2003 ರಾಜಭವನದ "ಗಾಜಿನ ಮನೆಯಲ್ಲಿ" ಜರುಗಿದ ರಾಜ್ಯ ಪುರಸ್ಕಾರ ಪ್ರಶಸ್ತಿಗಳ ವಿತರಣೆ, ರಾಷ್ಟ್ರೀಯ ಹಾಗೂ ರಾಜ್ಯ ಸಂಸ್ಥೆಯ ಪ್ರಶಸ್ತಿಗಳ ವಿತರಣಾ ಸಮಾರಂಭ ಸಂಸ್ಥೆಯ ಇತಿಹಾಸದಲ್ಲಿಯೇ ಅತ್ಯಂತ ಸಂಭ್ರಮ, ಸಡಗರ ಹಾಗೂ ಹೆಮ್ಮೆಯ ಸಮಾರಂಭ.

ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳೂ ಹಾಗೂ ಸಂಸ್ಥೆಯ ಗೌರವಾನ್ವಿತ ಅಧ್ಯಕ್ಷರಾದ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಅವರು ರಾಜ್ಯದಲ್ಲಿ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿ ಹಾಗೂ ಬೆಳವಣಿಗೆಗೆ ಸಲ್ಲಿಸಿರುವ ವಿಶಿಷ್ಟವಾದ ಸೇವೆಯನ್ನು ಪರಿಗಣಿಸಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಯವರು ನೀಡಿರುವ ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿಯಾದ **"ಬೆಳ್ಳಿಯ ಆನೆ"** ಪುರಸ್ಕಾರವನ್ನು ರಾಜ್ಯದ ಘನತೆವೆತ್ತ ರಾಜ್ಯಪಾಲರೂ, ಸಂಸ್ಥೆಯ ಪೋಷಕರೂ ಆದ ಸನ್ಮಾನ್ಯ ಶ್ರೀ ಟಿ. ಎನ್. ಚತುರ್ವೇದಿ ಅವರು ನೀಡಿ ಗೌರವಿಸಿದ್ದು, ಮಹತ್ವದ ಮತ್ತು ಹೆಮ್ಮೆಯ ಹೆಗ್ಗುರುತಾಗಿದೆ.

ಸನ್ಮಾನ್ಯ ಮುಖ್ಯಮಂತ್ರಿಗಳು ಇದೇ ಸಂದರ್ಭದಲ್ಲಿ, ಘನತೆವೆತ್ತ ರಾಜ್ಯಪಾಲರನ್ನು ಸಂಸ್ಥೆಯ ಪರವಾಗಿ ಶಾಲು-ನೆನಪಿನ ಕಾಣಿಕೆ ಹಾಗೂ ಫಲತಾಂಬೂಲಗಳ ಮೂಲಕ ಗೌರವಿಸಿದ್ದು - ನಮಗೆಲ್ಲಾ ಹೆಮ್ಮೆಯಾಗಿದೆ. ರಾಜ್ಯದ ಸಂವಿಧಾನದ ಮುಖ್ಯಸ್ಥರಾದ ಘನತೆವೆತ್ತ ರಾಜ್ಯಪಾಲರು, ಆಡಳಿತದ ಮುಖ್ಯಸ್ಥರಾದ ಸನ್ಮಾನ್ಯ ಮುಖ್ಯಮಂತ್ರಿಗಳನ್ನು ಗೌರವಿಸಿದ್ದು ಸಂಸ್ಥೆಯ ಇತಿಹಾಸದಲ್ಲಿ ಇದುವರೆಗೆ ನಡೆದಂತ ಸಮಾರಂಭದಲ್ಲಿ ಬಹು ವಿಶಿಷ್ಟವಾದುದೆಂಬುದೇ ನಮಗೆಲ್ಲಾ ಹೆಮ್ಮೆ ಹಾಗೂ ಅಭಿಮಾನದ ಸಂಗತಿ.

ಇದೇ ಸಂದರ್ಭದಲ್ಲಿ ಸಮಾರಂಭದಲ್ಲಿ ಉಪಸ್ಥಿತರಿದ್ದ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಸನ್ಮಾನ್ಯ ಸಚಿವರಾದ ಶ್ರೀ ಎಸ್. ಎಸ್. ಮಲ್ಲಿಕಾರ್ಜುನ್ ಅವರನ್ನು ಘನತೆವೆತ್ತ ರಾಜ್ಯಪಾಲರು ಸಂಸ್ಥೆಯ ಪರವಾಗಿ ಸನ್ಮಾನಿಸಿ ಅಭಿನಂದಿಸಿದರು.

ಸಂಸ್ಥೆಯ ಅಭಿಮಾನಿಗಳೂ - ಹಿತಚಿಂತಕರೂ ಹಾಗೂ ರಾಜ್ಯಸಭೆಯ ಗೌರವಾನ್ವಿತ ಸದಸ್ಯರಾದ ಡಾ. ಪಿ. ಸೆಲ್ವಿದಾಸ್ ಅವರನ್ನು ಘನತೆವೆತ್ತ ರಾಜ್ಯಪಾಲರು ಸಂಸ್ಥೆಯ ಪರವಾಗಿ ಸನ್ಮಾನಿಸಿ, ಅಭಿನಂದಿಸಿದರು.

ಪ್ರಥಮ ಬಾರಿಗೆ ರಾಷ್ಟ್ರೀಯ ಪ್ರಶಸ್ತಿಗಳ ಪುರಸ್ಕೃತರನ್ನು ಹಾಗೂ ರಾಜ್ಯದ ನಾಲ್ಕು ವಿಭಾಗಗಳಿಂದ ಆರಿಸಲ್ಪಟ್ಟಿದ್ದ ಅತ್ಯುತ್ತಮ ಸ್ಕೌಟರ್-ಗೈಡರ್‌ಗಳು, ಅತ್ಯುತ್ತಮ ಸ್ಥಳೀಯ ಸಂಸ್ಥೆಗಳು, ಅತ್ಯುತ್ತಮ ಮುಕ್ತದಳಗಳನ್ನು ಈ ಸಂದರ್ಭದಲ್ಲಿ ಘನತೆವೆತ್ತ ರಾಜ್ಯಪಾಲರು ಅಭಿನಂದಿಸಿ ಸನ್ಮಾನಿಸಿದ್ದು ಅತ್ಯಂತ ಹೃದಯಸ್ಪರ್ಶಿಯಾಗಿತ್ತು. ಸಂಸ್ಥೆಯ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸಿ ರಾಜ್ಯಪಾಲರಿಂದ ಅಭಿನಂದಿಸಲ್ಪಟ್ಟವರು ತೃಪ್ತಿಗೊಂಡಿದ್ದನ್ನು ನೋಡಿ ಸಭೆಯಲ್ಲಿದ್ದ ಸಹಸ್ರಾರು ಯುವಶಕ್ತಿಗಳು ಹಾಗೂ ನಾಯಕರು ಅಭಿಮಾನಪಟ್ಟಿದ್ದಾರೆ.

ರಾಜ್ಯ ಪುರಸ್ಕಾರಗಳಿಗೆ ರಾಜ್ಯದ ಎಲ್ಲ ಜಿಲ್ಲೆಗಳಿಂದ ಅರ್ಹರಾದ 3891 ಚತುರ್ಥ ಚರಣ್, ಹೀರಕ್‌ಪಂಕ್, ಕಬ್ಸ್ - ಬುಲ್‌ಬುಲ್‌ಗಳು - ರಾಜ್ಯ ಪುರಸ್ಕಾರ - ಸ್ಕೌಟ್ಸ್ - ಗೈಡ್ಸ್‌ಗಳು ಹಾಗೂ ನಿಪುಣ್ ರೇಂಜರ್ಸ್ - ರೋವರ್ಸ್‌ಗಳಿಗೆ ಘನತೆವೆತ್ತ ರಾಜ್ಯಪಾಲರು ಅತ್ಯಂತ ಪ್ರೀತಿ - ವಾತ್ಸಲ್ಯಗಳಿಂದ ಪ್ರಶಸ್ತಿ ಪತ್ರಗಳನ್ನು ವಿತರಣೆ ಮಾಡಿ ಆಶೀರ್ವದಿಸಿದ್ದು ಮುದ್ದುಮಕ್ಕಳ ಮುಂದಿನ ಭವಿಷ್ಯಕ್ಕೆ ಉತ್ತಮ ಬುನಾದಿ ಹಾಕಿದಂತಾಯಿತು.

ಸನ್ಮಾನ್ಯ ಘನತೆವೆತ್ತ ರಾಜ್ಯಪಾಲರು ಹಾಗೂ ಗೌರವಾನ್ವಿತ ಮುಖ್ಯಮಂತ್ರಿಗಳು ಸಮಾರಂಭದಲ್ಲಿ ಮಾಡಿದ ಆಶೀರ್ವಾದ ರೂಪದ ಮಾತುಗಳು ಸಮಾರಂಭದಲ್ಲಿ ಭಾಗವಹಿಸಿದವರೆಲ್ಲರನ್ನೂ ಪುಳಕಿತರನ್ನಾಗಿಸಿದೆ. ಸಂಸ್ಥೆಯ ತತ್ವ, ಆದರ್ಶ ಹಾಗೂ ನೀತಿಗಳನ್ನು ಯತೇಚ್ಛವಾಗಿ ಪುನರುಚ್ಚರಿಸಿದ ಸನ್ಮಾನ್ಯ ಮುಖ್ಯ ಮಂತ್ರಿಗಳು - ಚಳವಳಿಯ ಬೆಳವಣಿಗೆಗೆ ರಾಜ್ಯ ಸರ್ಕಾರ ತನ್ನ ಎಲ್ಲಾ ನೆರವನ್ನು ನೀಡಲು ಸಿದ್ಧವಿದೆ ಎಂದು ಘೋಷಿಸಿದ್ದಾರೆ. ಅವರು ಸಮಾರಂಭದಲ್ಲಿ ಮಾಡಿದ ಭಾಷಣವನ್ನು ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

ಘನತೆವೆತ್ತ ರಾಜ್ಯಪಾಲರು ಮಾತನಾಡಿ ಅತ್ಯಂತ ಉತ್ತಮ ಮೌಲ್ಯಗಳುಳ್ಳ ಈ ಚಳವಳಿ ರಾಜ್ಯದ ಎಲ್ಲಾ ಶಾಲೆಗಳಿಗೂ ಹರಡಬೇಕು ಎಂದು ಹಾರೈಸಿದುದಲ್ಲದೆ, ಎಲ್ಲ ಸಂಸ್ಥೆಗಳು ಹಾಗೂ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯ್ತಿಗಳು, ಪುರಸಭೆಗಳು, ನಗರಸಭೆಗಳು ಚಳುವಳಿಯ ಬೆಳವಣಿಗೆಗೆ ಬೇಕಾದ ಎಲ್ಲ ನೆರವನ್ನು ನೀಡಬೇಕೆಂದು ಕರೆ ನೀಡಿದ್ದಾರೆ. ಮಾನ್ಯ ರಾಜ್ಯಪಾಲರು ಸಮಾರಂಭದಲ್ಲಿ ನೀಡಿದ ಸಂದೇಶವನ್ನು ಪ್ರಕಟಿಸಲಾಗಿದೆ.

ಅಲ್ಲದೆ, ಶಾಸಕರುಗಳು ಹಾಗೂ ಸಂಸದರು ಹಾಗೂ ಪ್ರಜಾಪ್ರಭುತ್ವ ಆಡಳಿತದ ಎಲ್ಲಾ ಸಾರ್ವಜನಿಕರು ಹಾಗೂ ಸರ್ಕಾರಿ-ಸರ್ಕಾರೇತರ ಸಂಸ್ಥೆಗಳ ಮುಖ್ಯಸ್ಥರು ಚಳವಳಿಯ ಬೆಳವಣಿಗೆಗೆ ಹಣದ ನೆರವು ಹಾಗೂ ಅನುಕೂಲಕರವಲ್ಲದ ವಿದ್ಯಾರ್ಥಿಗಳಿಗೆ ಸಮವಸ್ತ್ರವನ್ನು ನೀಡಲು ಕಳಕಳಿಯ ಮನವಿ ಮಾಡಿದ್ದಾರೆ. ಅತ್ಯಂತ ವರ್ಣರಂಜಿತ ಹಾಗೂ ಭಾವನಾತ್ಮಕವಾಗಿ ಎರಡು ಘಂಟೆಗಳ ಕಾಲ ಜರುಗಿದ ಈ ವೈಶಿಷ್ಟ್ಯಪೂರ್ಣ ಸಮಾರಂಭದಲ್ಲಿ ಉಪಸ್ಥಿತರಿದ್ದ ರಾಜ್ಯದ ಎಲ್ಲ ಭಾಗಗಳಿಂದ ಬಂದಿದ್ದ ಕಬ್-ಬುಲ್‌ಬುಲ್‌ಗಳು, ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್-ರೇಂಜರ್‌ಗಳು ಹಾಗೂ ಸ್ಕೌಟರ್-ಗೈಡರ್‌ಗಳಿಗೆ, ತಂದೆ-ತಾಯಿಗಳಿಗೆ, ಪೋಷಕರುಗಳಿಗೆ, ಶಾಲಾಮುಖ್ಯಸ್ಥರುಗಳಿಗೆ ಸಂಸ್ಥೆಯಲ್ಲಿ ಸುದೀರ್ಘ ಸೇವೆ ಸಲ್ಲಿಸಿದ ನಾಯಕರುಗಳಿಗೆ ಇದೊಂದು ಮಹತ್ವದ ದಿನವಾಗಿದ್ದನ್ನು ಯಾರೂ ಮರೆಯಲು ಸಾಧ್ಯವಿಲ್ಲ.

ಸಂಸ್ಥೆ ದೊಡ್ಡದು - ಚಿಂತನೆ ದೊಡ್ಡದು - ಆದರ್ಶ ದೊಡ್ಡದು. ನಮಗೆ ಈ ಸಂಸ್ಥೆಯಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರಕಿದೆ - ಇದು ನಮ್ಮ ಭಾಗ್ಯ ಎಂಬ ಚಿಂತನೆಯೊಂದಿಗೆ ಚಳುವಳಿಯ ಬೆಳವಣಿಗೆಗೆ ನಾವೆಲ್ಲಾ ಶ್ರಮಿಸೋಣ. ಭಗವಂತನ ಕೃಪೆಯಿಂದಲೂ - ಆತ್ಮತೃಪ್ತಿಯಿಂದಲೂ ನಮ್ಮ ಕೈಲಾದ ಕೆಲಸ ಕಾರ್ಯಗಳನ್ನು - ನಿಷ್ಠಾಪೂರ್ಣವಾಗಿ ಮತ್ತು ಶ್ರದ್ಧಾಪೂರಕವಾಗಿ ಮಾಡುವ ಚಿಂತನೆಗಳು ನಮಗೆಲ್ಲಾ ಬರಲಿ ಎಂದು ಪ್ರಾರ್ಥಿಸುತ್ತೇನೆ

ನಮ್ಮಗಳ ಕಾರ್ಯವ್ಯಾಪ್ತಿಯಲ್ಲಿ ಹಾಕಿಕೊಂಡಿರುವ ಕಾರ್ಯಯೋಜನೆಗಳನ್ನು ಹಾಗೂ ಅಂಕಿ-ಸಂಖ್ಯೆಗಳನ್ನು ಮುಟ್ಟುವ ಸಂಕಲ್ಪ ಮಾಡೋಣ. ಯಶಸ್ಸು ಗಳಿಸುವತ್ತ ಮುನ್ನಡೆಯೋಣ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ,

(ಕೊಂಡಜ್ಜಿ ಬಿ. ಷಣ್ಮುಖಪ್ಪ)

## Governor Presents the Highest Prestigious & Distinguished 'SILVER ELEPHANT' National Award to Sri S.M. Krishna, Hon'ble Chief Minister of Karnataka at Raj Bhavan

**K S & G NEWS SERVICE**




His Excellency the Governor of Karnataka Sri T.N. Chaturvedi presents the Silver Elemphant National Award to Sri S.M. Krishna, Hon'ble Chief Minister of Karnataka

Bangalore June 19.

His Excellency the Governor of Karnataka and the Patron of the Bharat Scouts and Guides, Karnataka, Sri T.N. Chaturvedi presented the 'Silver Elephant' National Award of the Bharat Scouts and Guides, India to Sri S.M. Krishna, Hon'ble Chief Minister of Karnataka and the President, The Bharat Scouts and Guides, Karnataka at a State Level Special function held at the Glass House, Raj Bhavan on 19th June 2003.

Earlier Sri S.M. Krishna,Chief Ministerof KarnatakaHonoured the Governor with a Memento, Shawls on behalf of the organisation.

Sri S.S. Mallikarjun, Hon'ble Minister of State for Youth Services and Sports, Dr. P. Selvie Dass, Hon'ble Member of Parliament (Rajya Sabha), were present on this occasion and they were honoured by the Governor.



Sri S.M. Krishna, Hon'ble Chief Minister of Karnataka
Honouring Sri T.N. Chaturvedi, His Excellency the Governor of Karnataka

The Governor of Karnataka Honoured Sri S.S. Mallikarjun, Hon'ble Minister of State for Youth Services and Sports with a Memento & Shawl. National Awardees, State Awardees 700 Cubs, Bulbuls, Scouts, Guides, Rovers, Rangers, Unit Leaders were also present. Invitees, Commissioners of all Rank in the State Head Quarters, District and Taluk Association were also present.

In his welcome address Sri Kondajji B. Shanmukhappa, State Chief Commissioner, requested the Government of Karnataka to extend all support and help to the Bharat Scouts and Guides, Karnataka to grow in Rural areas through the support of the Department of Rural Development and Panchayat Raj, Department of Public Instructions and the Department of Youth Services and Sports and other Democratic Bodies like Gram - Taluk & Jilla Panchayats.

He said the movement will celebrate its Centenary Celebrations during 2007 all over around the world.

Sri Chinnaswamy Reddy, State Secretary co-ordinated the programme.

**Application of the Principles of Scouting & Guiding is adapted to the local needs of Youth and Society. The wide range of Constructive and Practical Activities includes : Training in Leadership and Citizenship, Developing Self-Reliance and Team-Work and Building World Understanding and Sister and Brotherhood.**



Sri T.N. Chaturvedi,
H.E. the Governor of Karnataka &
the Patron of The Bharat Scouts &
Guides, Karnataka greeting
Sri S.M. Krishna,
the Hon'ble Chief Minister of
Karnataka & the President,
The Bharat Scouts & Guides,
Karnataka
after presenting the Distinguished
'Silver Elephant Award'



The Governor of Karnataka
Honoured Sri S.S. Mallikarjun,
Minister of State for
Youth Services & Sports,
Govt. of Karnataka
on the occasion.

# Governor ask M.P.s, M.L.A.s, M.L.C.s Zilla Panchayats & Elected Bodies to Support Karnataka Scouts & Guides

I am delighted to be amidst you at this important ceremony to present various Awards to the members of Scout/Guide family.

Karnataka Scouting and Guiding has an exciting and excellent record of achievements, attainments and awe-inspiring success of over eight decades. Blessed with the Royal Patronage, Karnataka Bharat Scouts and Guides, began with Pride, Prestige and Popularity when the then Queen, His Highness and the Yuvaraja spontaneously became respectively the Chief Guide, the Chief Scout and the Chief Cub. Later, School Admini-stration took the responsibility of spreading Scouting and Guiding in the State and presently Karnataka has over 2.20 lakh Scouts and Guides. Scouts and Guides is the largest uniformed voluntary Youth Movement in the State of Karnataka. History records that the First Scout Troop in the country was started in the Bishop Cotton School, Bangalore during 1909, immediately after the commencement of the movement in 1907 by Lord Baden Powell in England.



Educationists, stalwarts and visionaries in Karnataka looked far ahead of times and guided, popularised and gave a fillip to the growth of this movement as a complement to educational activity. By 2006 Karnataka has plans to reach a target of about 4 lakhs of Scouts and Guides. The Department of Public Instruction, Department of Youth Services and Sports, Gram Panchayats, Taluk Panchayats, Zilla Panchayats, Municipalities, Corpo-rations all over the State will have to actively support the Movement to achieve this target by 2006.

Keen interest and active involvement of MLAs, MLCs, Members of Parlia-ment has further strengthened and encouraged the growth and development of this movement in the State. Reser-vations in allotment of seats in professional courses, technical courses, offer additional impetus to youngsters to join the movement. With the progressive increase year after year, in the qualifying Scouts and Guides for Rajyapuraskar and Rashtrapathi Awards, steps should be taken to increase this Quota to match the growing numbers every year.

My joy knew no bounds while presenting the Awards to the Cubs, Bulbuls, Scouts, Guides, Rovers and Rangers, 10 National Awardees and 16 State Awardees. I look forward to the increase in these awards in the State in the years to come. A word of praise and compliment appears to be apt and relevant to the Volunteers-Scouters and Guiders for their zeal, dedication, commitment and performance in taking the move-ment to the pinnacle of glory.

To conclude, I wish to appeal to everyone concerned about the Movement to endeavour their best to see that every school in the State is covered with at least one unit of Cub/Bulbul and one unit of Scout/ Guide, all over Karnataka. Institutions at higher levels of education should popularise the Rover and Ranger Units to attract more and more youth fired with ideals of good citizenship. Local administrations, NGOs and voluntary agencies should come forward to provide free uniforms to the Volunteering Units. A genuine, value-based human resource development movement called Scouting & Guiding will then grow to shape the careers and fortunes of thousands and thousands of ambitious youth in the State and ultimately in the country.

I heartily congratulate Shri Ananthkumar, Union Minister for Urban Development and Poverty Alleviation (in absentia) and Shri S.M. Krishna, Chief Minister of Karnataka on their being awarded the 'Silver Elephant - National Award' by Bharat Scouts & Guides in recognition of the help and succour rendered by them to the organisation.

My God bless you all.

JAI KARNATAKA, JAI BHARAT.



His Excellency the Governor of Karnataka Sri T.N. Chaturvedi hounored Dr. P. Selvie Das, Hon'ble Member of Rajya Sabha, who supported the Development of Besant Park Training Centre by providing Rs. 10 lakhs out of her 'MPLAD' Funds.

# ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಮೂಡಿಬರಬೇಕೆಂಬುದು ನನ್ನ ಆಶೆ

**- ಎಸ್. ಎಂ. ಕೃಷ್ಣ** ಮಾನ್ಯ ಮುಖ್ಯಮಂತ್ರಿಗಳು

ಗೌರವಾನ್ವಿತ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಅವರೆ, ರಾಜ್ಯದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕಮೀಷನರ್‌ರವರಾದ ಕೊಂಡಜ್ಜಿ ಬಿ. ಷಣ್ಮುಖಪ್ಪರವರೆ, ಮಹನೀಯರೆ ಮತ್ತು ಮಹಿಳೆಯರೆ,

ಅತ್ಯಂತ ಧನ್ಯತಾ ಭಾವದಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಈ ಪುರಸ್ಕಾರವನ್ನು ಸ್ವೀಕರಿಸಿದ್ದೇನೆ.

ಯುವ ಜನಾಂಗವನ್ನು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸುವ ಮೂಲಕ ಭವಿಷ್ಯದಲ್ಲಿ ಜವಾಬ್ದಾರಿ ಯುತ ಪ್ರಜೆಗಳನ್ನಾಗಿಸುವ ಮಹತ್ವದ ಕಾಯಕದಲ್ಲಿ ನಿರತವಾಗಿರುವ ಸ್ಕೌಟ್ಸ್ ಮೊಲುತ್ತು ಗೈಡ್ಸ್ ಸಂಸ್ಥೆಯ ಸೇವೆ ಅನನ್ಯವಾದದ್ದು.



ವಿಶ್ವದ ೨೧೬ಕ್ಕಿಂತ ಹೆಚ್ಚು ರಾಷ್ಟ್ರಗಳಲ್ಲಿ ಕ್ರಿಯಾಶೀಲ ವಾಗಿರುವ ಈ ಮಹಾಸಂಸ್ಥೆ ಶತಮಾನೋತ್ಸವದ ಹೊಸ್ತಿಲಲ್ಲಿದೆ.

೧೯೧೨ರಷ್ಟು ಹಿಂದೆ ಕರ್ನಾಟಕದಲ್ಲಿ ಈ ಚಳುವಳಿ ಪ್ರಾರಂಭವಾಯಿತು. ನಾನು ಕೂಡ ಶಾಲಾ ದಿನಗಳಲ್ಲಿ ಸ್ಕೌಟ್ಸ್‌ನಲ್ಲಿ ಭಾಗಿಯಾಗಿದ್ದನ್ನು ಈ ಸಮಯದಲ್ಲಿ ಸ್ಮರಿಸಿಕೊಳ್ಳುತ್ತಿದ್ದೇನೆ. ನನ್ನ ಜೀವನದ ಮೇಲೆ ವಿಶೇಷವಾಗಿ ವಿದ್ಯಾರ್ಥಿ ದಿಸೆಯಲ್ಲಿ ಅಚ್ಚಳಿಯದ ಪ್ರಭಾವವನ್ನು ಈ ಚಳುವಳಿ ಬೀರಿತ್ತು. ಜೀವನದಲ್ಲಿ ಶ್ರದ್ಧೆ, ಪ್ರೀತಿ, ಸಾಹಸಪ್ರಿಯತೆ, ಕ್ರಿಯಾಶೀಲತೆ ಮತ್ತು ಕ್ರೀಡಾ ಮನೋಭಾವ ರೂಪಿಸಬಲ್ಲ ಸಾಮರ್ಥ್ಯ ಈ ಚಳುವಳಿಗಿರುವುದನ್ನು ಸ್ವಾನುಭವದಿಂದ ಬಲ್ಲೆ. ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಮೂಡಿ ಬರಬೇಕೆಂಬುದು ನನ್ನ ಆಶೆ.

ಶಿಸ್ತಿನ ಸಿಪಾಯಿಗಳನ್ನು ರೂಪಿಸುತ್ತಿರುವ ಈ ಚಳುವಳಿಯಿಂದ ಸಮಾಜಕ್ಕೆ ಬಹುಮುಖಿ ಸೇವೆ ಸಲ್ಲುತ್ತಿದೆ. ಸಮುದಾಯ ಸೇವೆ, ಆರೋಗ್ಯ ಶಿಬಿರ, ಪರಿಸರ ಸಂರಕ್ಷಣೆ, ವನಸಂರಕ್ಷಣೆ, ಸಾಕ್ಷರತೆ, ನೈರ್ಮಲ್ಯ, ಏಡ್ಸ್‌ನಂತಹ ಮಾರಕ ರೋಗಗಳ ಬಗ್ಗೆ ಅರಿವು ಮೂಡಿಸುವಿಕೆ, ರಕ್ತದಾನ ಶಿಬಿರ ವ್ಯವಸ್ಥೆ ಮೊದಲಾದ ಸೇವಾ ಚಟುವಟಿಕೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್, ರೋವರ್ಸ್ ಮತ್ತು ರೇಂಜರ್ಸ್ - ಈ ಎಲ್ಲಾ ವಿಭಾಗಗಳ ಪ್ರತಿನಿಧಿ ಗಳು ಸಕ್ರಿಯ ಸೇವೆ ಸಲ್ಲಿಸುತ್ತಿದ್ದಾರೆ. ಸಮಾಜ ಇವರೆಲ್ಲರಿಗೂ ಚಿರಋಣಿ ಯಾಗಿದೆ.

ಸಂಸ್ಥೆಯ ಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ರವರ ಆಶಯದಂತೆ ಸದಾ ಹರ್ಷಚಿತ್ತರಾಗಿ, ಇತರರೂ ಹರ್ಷಚಿತ್ತ ರಾಗಿರುವಂತೆ ಶ್ರಮಿಸುತ್ತಿರುವ ಈ ಚಳುವಳಿ ಯಶಸ್ಸಿನ ಹೊಸ ಮಜಲು ಗಳನ್ನೇರಲೆಂದು ಆಶಿಸಿ ನನಗಿತ್ತ ಈ ಪುರಸ್ಕಾರಕ್ಕಾಗಿ ಮತ್ತು ನನ್ನನ್ನು ಇಲ್ಲಿಗೆ ಬರಮಾಡಿಕೊಂಡಿದ್ದಕ್ಕಾಗಿ ಧನ್ಯವಾದ ಗಳನ್ನು ಅರ್ಪಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ನಮಸ್ಕಾರ.

# Nine Adult Leaders Honoured by the Governor of Karnataka

**K S & G NEWS SERVICE**

Bangalore June 19.

His Excellency the Governor of Karnataka honoured the following National Awardees of the Bharat Scouts and Guides, India on 19th June 2003 at Raj Bhavan, Bangalore.

Sri I.A. Kairanna, District Chief Commissioner, Dakshina Kannada, Mangalore – Silver Elephant Awardee - 2000.

Late Vasanthi Bai Jigajini, Former Asst. State Commissioner (Guides) Belgaum Division – Silver Elephant Awardee 2000. (Smt. Gurudevi, D/o. Late Vasanthi Bai Jigajini, Bijapur received the Award).

Sri M.M. Londe, District Chief Commissioner, Dharwad, Bar - To - Silver Star - Awardee, 2000.

Sri K. Thimmaiah District Chief Commissioner, Raichur & Asst. State Commissioner (Scouts), Gulbarga Division, Silver Star – 2000.

Smt. Geetha Nataraj, Asst. State Commissioner (Guides) Bangalore Division Silver Star - Awardee - 2000.

Sri Mohammed Wasil, Headquarters Commissioner (Programme), Davanagere Silver Star Awardee - 2001. Sri Krishnoji Rao Bhounsley Group Leader 135, Jhansi Scout Group, Bangalore South, Silver Star Awardee 2001.

Smt. C.A. Meenaxi, District Chief Commissioner, Kodagu District, Madikeri - Silver Star Awardee 2001.

Smt. N.H. Kamalakshamma, Former State Organising Commissioner (Guides), Bangalore - Silver Star 2001.

His Excellency the Governor of Karnataka, honoured them with a Memento, Shawl, Garland and with a Certificate of Commedation by His Excellency the Governor.

Sri M.A. Chelliah, Headquarters Commissioner (Information and Public Relations) Co-ordinated the programme.

## Divisionwise State Awards for Best Local Association, Open Unit, Veteran Scouter and Guider presented at Raj Bhavan, on 19th June 2003

His Excellency the Governor of Karnataka presented **"Kondajji Shanmukhappa Scout & Guide Fund State Awards"** for the year 2002-03 at Raj Bhavan, Bangalore on 19.6.2003.

These State Awards have been constituted for being presented to the Best Local Association, Best Open Unit, Veteran Scouter and Veteran Guider of each Division. The details of the Award presented on 19.6.2003 are mentioned in page no. 13.

His Excellency the Governor of Karnataka, honoured them with a Memento, Shawl, Garland and with a Certificate, signed by His Excellency the Governor.

# THE BHARAT SCOUTS AND GUIDES, KARNATAKA

Kondajji B. Shanmukhappa Scout & Guide Fund State Awards for the year 2002-03
Sri T. N. Chaturvedi, His Excellency the Governor of Karnataka presented these Awards on 19.6.2003 at Raj Bhavan, Bangalore

| SL NO. | DIVISION | BEST LOCAL ASSOCIATION | BEST OPEN UNIT | VETERAN SCOUTER | VETERAN GUIDER |
|---|---|---|---|---|---|
| 1 | Bangalore Division | **Shimoga L.A.**<br>C/o. Scout Bhavan<br>B.H. Road, Shimoga | **Sri Chamundi Scout Group**<br>Malleswaram<br>Bangalore | **Sri Bindu Madhava Rao**<br>Sri Rama<br>Shishu Vihara School<br>Chamarajpet<br>Banglore | **Smt. K.S. Kamalamma**<br>Sarvodaya School<br>Tumkur |
| 2 | Mysore Division | **Kadiyali A.**<br>C/o. Scout Bhavan<br>Udupi | **Paradise ScoutTroop**<br>Devaraj Urs Rd.<br>Mysore City Dt.<br>Mysore | **Sri Boliyanna Ballal**<br>Panchalingeshwara<br>Scout Troop<br>Bantwal<br>Dakshina Kannada | **Sr. Cynthiya**<br>St. Josephs<br>Higher Primary School<br>Koppa<br>Chikmagalur |
| 3 | Belgaum Division | **Gadag L.A.**<br>Gadag<br>Gadag District | **Kadasiddeshwara ScoutTroop**<br>Bagalkot<br>Bagalkot District | **Sri S.S. Nimbal**<br>Bijapur District | **Smt. Lakshmi Bai Mangi**<br>Govt. Junior College<br>Gokak<br>Belgaum District |
| 4 | Gulbarga Division | **Gangavathi L.A.**<br>Gangavathi<br>Koppal District | **Ayurveda Scout Group**<br>Gulbarga<br>Gulbarga District | **Sri G.N. Krishna Murthy**<br>Tagore Memorial<br>High School<br>Raichur | **Smt. Grace Padma**<br>London Mission<br>Telugu Higher Primary<br>School. Bellary |



His Excellency the Governor of Karnataka Sri T.N. Chaturvedi released a Log Book for Guides brought out by the organisation. Sriyuths C.R. Mohamed Zahiruddin SC (S), Kondajji B. Shanmukhappa, SCC & Dr. P. Selvie Das, Member of Parliament are seen.




His Excellency the Governor of Karnataka Sri T.N. Chaturvedi released a book titled "Youth in the Nation Building Mission" (ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಯುವಕರು) written by Sri R. Chandrashekharan, Headquarters Commissioner for Publications.

# Governor Presents Rajya Puraskar Awards

**K S & G NEWS SERVICE**

Bangalore June 19.

His Excellency the Governor of Karnataka Sri T.N. Chaturvedi presented the Chathurtha Charan Awards for Cubs, Heerak Pankh Awards for Bulbuls, Rajya Puraskar Awards for Scouts and Guides, Nipun Awards for Rovers and Rangers at a State Level Special Function held at the Glass House, Raj Bhavan on 19th June 2003.

540 Cubs, 545 Bulbuls, 1517 Scouts, 1260 Guides, 22 Rovers and 7 Rangers have been qualified and received the Awards during the year 2002-03. Selected Cubs, Bulbuls, Scouts, Guides, Rovers and Rangers from each District received the Award on behalf of all the participants from the Districts. 700 Awardees attended the colourful Function held at Raj Bhavan.

At the end children from M.E.C. School, Yelahanka, presented a Colourful Cultural Programme. Sri C.R. Mohamed Zahiruddin, State Commissioner (scouts) proposed hearty vote of thanks to the Governor, Chief Minister, Minister, Awardees, Invitees, Press & the Media, Secretary, Staffs of Raj Bhavan and the Participants.



His Excellency the Governor of Karnataka Sri T.N. Chaturvedi presenting the Certificates to a Cub, Bulbul, Scout and a Guide.

**ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ**

ಹೊಸ ಸಾರ್ವಜನಿಕ ಕಛೇರಿಗಳು, ನೃಪತುಂಗ ರಸ್ತೆ ಬೆಂಗಳೂರು - 560 001.

**ಸಂಖ್ಯೆ : ದೈಶಿ2/ಭಾ.ಸ್ಕೌ.ಗೈ/10/97-98** **ದಿನಾಂಕ : 05-06-2003**

## -: ಸುತ್ತೋಲೆ :-

ವಿಷಯ : ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಶಾಲೆಗಳಲ್ಲಿ ವಿಸ್ತರಿಸುವ ಹಾಗೂ ಇದರ ವಾರ್ಷಿಕ ನೊಂದಣಿ ಶುಲ್ಕವನ್ನು ಪಡೆಯುವ ಬಗ್ಗೆ

ಉಲ್ಲೇಖ : 1) ಈ ಕಛೇರಿ ಜ್ಞಾಪನ ಪತ್ರ ಸಮ ಸಂಖ್ಯೆ ದಿನಾಂಕ 29-04-2002.
2) ರಾಜ್ಯ ಮುಖ್ಯ ಆಯುಕ್ತರು, ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್‌ರವರ ಮನವಿ ಪತ್ರ ಸಂಖ್ಯೆ : ಬಿಎಸ್‌ಜಿ/ಎಸ್‌ಹೆಚ್‌ಕ್ಯೂ/144/03-04 ದಿನಾಂಕ : 08-05-2003.

-----------

ರಾಜ್ಯದ ಮುಖ್ಯ ಆಯುಕ್ತರು, ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ, ಬೆಂಗಳೂರು ರವರು ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಶಾಲೆಗಳಲ್ಲಿ ವಿಸ್ತರಿಸುವಂತೆಯೂ ಮತ್ತು ಈ ಸಂಸ್ಥೆಯ ತಂಡಗಳು ಕಾರ್ಯನಿರ್ವಹಿಸುತ್ತಿರುವ ಶಾಲಾ ಮಕ್ಕಳಿಂದ ತಲಾ ರೂ.5-00 ನೊಂದಣಿ ಶುಲ್ಕವನ್ನು ಕಡ್ಡಾಯವಾಗಿ ಎಲ್ಲಾ ಮಕ್ಕಳಿಂದ ಪಡೆಯುವ ಕುರಿತು ಹಾಗೂ ಶಾಲಾ ಅಭಿವೃದ್ಧಿ ಮಂಡಳಿಯು ಆರ್ಥಿಕವಾಗಿ ಹಿಂದುಳಿದ ಸ್ಕೌಟ್ಸ್ ಅಂಡ್ ಗೈಡ್‌ಗೆ ಸೇರುವ ಶಾಲಾ ಮಕ್ಕಳಿಗೆ ಸಮವಸ್ತ್ರ ಮತ್ತು ಇತರೆ ಸೌಲಭ್ಯಗಳನ್ನು ನೀಡಿ ಸಂಪೂರ್ಣ ಸಹಕಾರ ನೀಡಿ ಸಹಕರಿಸಲು ಕೋರಿರುತ್ತಾರೆ.

ಸದರಿರವರ ಮನವಿಯನ್ನು ಪರಿಗಣಿಸಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್ ಅಂಡ್ ಗೈಡ್ಸ್ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿ ಕ್ರಮ ಕೈಗೊಳ್ಳುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ :

1. ಇಲಾಖಾ ಅಧಿಕಾರಿಗಳು ಮತ್ತು ಶಾಲಾ ಮುಖ್ಯಸ್ಥರು ಸ್ಕೌಟ್ಸ್/ಗೈಡ್ಸ್‌ನ ವಾರ್ಷಿಕ ನೋಂದಣಿ ಶುಲ್ಕ ರೂ. 5-00ನ್ನು ಯಾವ ಶಾಲೆಗಳಲ್ಲಿ ಕಬ್/ಬುಲ್‌ಬುಲ್, ಸ್ಕೌಟ್ಸ್/ಗೈಡ್ಸ್ ತಂಡಗಳಿದೆಯೋ ಅಥವಾ ಯಾವ ಶಾಲೆಗಳಲ್ಲಿ ಕಬ್/ಬುಲ್‌ಬುಲ್, ಸ್ಕೌಟ್ಸ್ ಗೈಡ್ಸ್‌ನ ತಂಡ ತೆರೆಯಲು ತರಬೇತಿ ಪಡೆದ ಉಪಾಧ್ಯಾಯರು ಇರುವಂತಹ ಎಲ್ಲಾ ಶಾಲಾ ಮಕ್ಕಳಿಂದ ವಾರ್ಷಿಕ ನೊಂದಣಿ ಶುಲ್ಕವಾಗಿ ರೂ. 5-00 (ತಲಾ) ನ್ನು ವಸೂಲು ಮಾಡಲು ಈ ಮೂಲಕ ಅನುಮತಿ ನೀಡಲಾಗಿದೆ.

2. ರಾಜ್ಯದ ಪ್ರತಿಯೊಂದು ಶಾಲಾ ಅಭಿವೃದ್ಧಿ ಮಂಡಳಿಗಳು ತಮ್ಮ ಶಾಲೆಯಲ್ಲಿನ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳ - ದಳಗಳ ಚಟುವಟಿಕೆಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ತಮ್ಮ ಸಭೆಗಳಲ್ಲಿ ಚರ್ಚಿಸಿ ಈ ಕಾರ್ಯಕ್ರಮಗಳನ್ನು ಶಾಲೆಗಳಲ್ಲಿ ಅಳವಡಿಸಿಕೊಂಡು ವಿಸ್ತರಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ತಿಳಿಸಿದೆ. ಹಾಗೂ ಆರ್ಥಿಕವಾಗಿ ಹಿಂದುಳಿದ ಶಾಲಾ ಮಕ್ಕಳು ಸ್ಕೌಟ್ ಮತ್ತು ಗೈಡ್‌ಗೆ ಸೇರಲು ಇಚ್ಛಿಸಿದಲ್ಲಿ ಅವರಿಗೆ ಅನುಕೂಲವಾಗುವಂತೆ ಬೇಕಾದಂತಹ ಸಮವಸ್ತ್ರ ಮತ್ತು ಇತರೆ ಸೌಲಭ್ಯಗಳನ್ನು ನೀಡಿ ಈ ಚಟುವಟಿಕೆಗಳ ಬಗ್ಗೆ ಸಂಪೂರ್ಣ ಸಹಕಾರ ನೀಡಬೇಕೆಂದು ಕೋರಲಾಗಿದೆ.

3. ಜಿಲ್ಲಾ ಉಪನಿರ್ದೇಶಕರು ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳು ತಮ್ಮ ಹಂತದಲ್ಲಿ ನಡೆಯುವ ತಾಲ್ಲೂಕು/ಜಿಲ್ಲಾ ಮಟ್ಟದ ಸಭೆಯಲ್ಲಿ ಎಲ್ಲಾ ಶಾಲೆಯ ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟ್ಸ್ ಅಂಡ್ ಗೈಡ್ಸ್

ಕಾರ್ಯಕ್ರಮಗಳನ್ನು ಶಾಲೆಗಳಲ್ಲಿ ಅಳವಡಿಸಿಕೊಂಡು ನಡೆಸುವ ಕುರಿತು ಚರ್ಚಿಸಿ ಕಾರ್ಯಕ್ರಮಗಳನ್ನು ನಡೆಸುವ ಬಗ್ಗೆ : ಹಮ್ಮಿಕ್ಕೊಳ್ಳುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ತಿಳಿಸಿದೆ. ಹಾಗೂ ಎಲ್ಲಾ ಶಾಲೆಗಳಲ್ಲಿಯ ದೈಹಿಕ ಶಿಕ್ಷಣ ಶಿಕ್ಷಕರಿಗೆ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯು ನಡೆಸುವ ವಿವಿಧ ರೀತಿಯ ತರಬೇತಿಗಳಲ್ಲಿ ಕಡ್ಡಾಯವಾಗಿ ಪಾಲ್ಗೊಂಡು ಹೆಚ್ಚಿನ ತರಬೇತಿಯನ್ನು ಪಡೆಯುವಂತೆ ಕ್ರಮ ಕೈಗೊಂಡು ಈ ರೀತಿ ತರಬೇತಿ ಪಡೆದ ದೈಹಿಕ ಶಿಕ್ಷಣ ಶಿಕ್ಷಕರಿಂದ ಶಾಲೆಗಳಲ್ಲಿ ಮಕ್ಕಳಿಗೆ ಸ್ಕೌಟ್ಸ್ ಅಂಡ್ ಗೈಡ್ಸ್‌ನ ತರಬೇತಿ ನೀಡುವಂತೆ ಕ್ರಮ ಕೈಗೊಳ್ಳತಕ್ಕದ್ದು. ಮತ್ತು ತಮ್ಮ ತಮ್ಮ ವ್ಯಾಪ್ತಿಯ ಎಲ್ಲಾ ಶಾಲೆಗಳಲ್ಲಿಯೂ ಸ್ಕೌಟ್ ಅಂಡ್ ಗೈಡ್‌ನ ಘಟಕಗಳನ್ನು ತೆಗೆಯಲು ಪ್ರೋತ್ಸಾಹಿಸಿ ತಮ್ಮ ಹಂತದಲ್ಲಿ ಕ್ರಮ ಕೈಗೊಳ್ಳಲು ತಿಳಿಸಿದೆ.

**"ಕರಡು ಪತ್ರ ಮಾನ್ಯ ಆಯುಕ್ತರಿಂದ ಅನುಮೋದಿಸಲ್ಪಟ್ಟಿದೆ."**

ನಿರ್ದೇಶಕರು (ಪ್ರೌಢ ಶಿಕ್ಷಣ)

**ಪ್ರತಿಗಳು :-**

1) ರಾಜ್ಯದ ಎಲ್ಲಾ ವಿಭಾಗೀಯ ಸಹನಿರ್ದೇಶಕರು ಹಾಗೂ ಪದನಿಮಿತ್ತ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿರವರಿಗೆ.
2) ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ ಸೂಕ್ತ ಕ್ರಮಕ್ಕಾಗಿ.
3) ಅಧ್ಯಕ್ಷರು : ಕಾರ್ಯದರ್ಶಿಗಳು, ಶಾಲಾ ಅಭಿವೃದ್ಧಿ ಮಂಡಳಿರವರಿಗೆ.
4) ರಾಜ್ಯದ ಎಲ್ಲಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ.
5) ರಾಜ್ಯದ ಎಲ್ಲಾ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರುಗಳಿಗೆ.
6) ಕಛೇರಿ ಪ್ರತಿ

---

# ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಶ್ರಮದಾನ ಶಿಬಿರ

ದಿನಾಂಕ 31-05-03 ರಿಂದ 2-06-03 ರವರೆಗೆ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಸ್ಕೌಟ್ಸ್ ಹಾಗೂ ರೋವರ್ಸ್‌ಗಳಿಂದ ಶ್ರಮದಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಶ್ರೀ ಎಂ.ಎ. ಚಿಲ್ಲಯ್ಯ, ಕೇಂದ್ರ ಕಛೇರಿ ಆಯುಕ್ತರು, ಸಾರ್ವಜನಿಕ ಸಂಪರ್ಕ ಇವರು ನಾಯಕರಾಗಿದ್ದು, ಬೆಂಗಳೂರು ದಕ್ಷಿಣ, ಕೋಲಾರ, ಉತ್ತರ, ದಾವಣಗೆರೆ ಜಿಲ್ಲೆಗಳಿಂದ 27 ಸ್ಕೌಟ್ಸ್ ಹಾಗೂ ರೋವರ್ಸ್‌ಗಳು ಭಾಗವಹಿಸಿದ್ದು ಶ್ರೀ ವಿ.ಪಿ. ದೀನದಯಾಳು ನಾಯ್ಡು ಸಮುದಾಯ ಭವನದ ಸುತ್ತಾಮುತ್ತಾ ಸ್ವಚ್ಛತೆ, ಡಾರ್ಮಿಟರಿ ಹಾಗೂ ಅಡಿಗೆ ಮನೆ ಸುತ್ತಮುತ್ತ ಸ್ವಚ್ಛತೆ ಕಂಠೀರವ ಭವನ, ಗಾಂಧಿಭವನ, ಸ್ಟೋರ್, ಅಡಿಗೆ ಮನೆ ಇತ್ಯಾದಿ ಕಡೆಗಳಲ್ಲಿ ಶ್ರಮದಾನ ಮಾಡಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು, ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಸಹಾಯಕ ಆಯುಕ್ತರಾದ (ಯೋಜನೆ ಮತ್ತು ಅಭಿವೃದ್ಧಿ) ಶ್ರೀ ಟಿ.ಎಸ್. ಲೂಕಾಸ್ ಇವರುಗಳು ಶಿಬಿರಕ್ಕೆ ಭೇಟಿ ನೀಡಿ ಮೆಚ್ಚುಗೆ ವ್ಯಕ್ತಪಡಿಸಿ, ಸೂಕ್ತ ಸಲಹೆ ನೀಡಿದರು.

ಶ್ರೀ ನಾರಾಯಣಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ), ಶ್ರೀ ಎಂ. ಶ್ರೀನಿವಾಸ್, ಶ್ರೀ ಗವಿಸಿದ್ದಯ್ಯ ಇವರುಗಳು ಸಹಾಯಕರಾಗಿದ್ದರು.

## *Rajya Puraskar Rally held at Shanti Gruha*

A Rally of Rajya Puraskar Scouts and Guides was held at Shanthi Gruha Camping Centre, Bangalore on 19th June 2003 Chathurtha Charan Cubs, Heerak Pankh Bulbuls, Nipun Rovers & Rangers also attended the Rally. 700 Cubs, Bulbuls, Scouts, Guides, Rovers & Rangers along with their Unit Leaders from allover the state participated in the State Level one day Rally held from 9 a.m. to 3 p.m.

This is a State Level event held on the occasion of the presentation of Awards Ceremony held at Raj Bhavan on 19th June 2003 at 4 p.m.

Sri Kondajji B. Shanmukhappa, State Chief Commissioner along with other officials visited the Rally and spoke to the participants.

Sri Narayana Setty, State Organising Commissioner (S), Smt. Janaki Venugopal, State Organising Commissioner (G) Co-ordinated the programme.

## *Key to Quiz No. 2*

1. ***Every Knight had to do a good turn every day to somebody.***
2. ***He should do two good turns the next day.***
3. ***Deep breathing exercises help us in developing the lungs and put fresh air (oxygen) into the blood.***
4. ***B.P. wants every scout should aim at "My Country before me".***
5. ***a) Willie Winter***

   ***b) Robert Hindmarsh***

   ***c) Margaret Crozier***
6. ***A patrol is a small group of scouts.***
7. ***'BE PREPARED' means "Be in a state of readiness in mind and body for duty".***
8. ***All wearers of scout badge salute each other once a day.***
9. ***The garters are green tabs which are used to held up the 'stockings' below the turn over of the stocking top.***
10. ***Scout Master of the troop.***

# All India State Commissioner's Meet held at Besant Park from 5th to 7th June 2003

**K S & G NEWS SERVICE**

Besant Park, June 5.

The All India State Commissioner's Meet of the Bharat Scouts and Guides India, was held at the State Training Centre, Besant Park, Doddaballapur from 5th to 7th June 2003. State Commissioners (Guides) from 17 States participated in the Meet.

Dr. M. Muniamma, Former Vice-Chancellor, Gulbarga University inaugurated the Meet on 5th June 2003. Sri Lalit Mohan Jain, National Commissioner, presided.

Smt. Shobhatai S. Potdukhe, Chief Commissioner (G) India and Smt. Sandhya Guha Roy, International Commissioner (G) were present.

Sri Kondajji B. Shanmukhappa, State Chief Commissioner, welcomed the Guests and the participants.

The purpose of the meet is to develop Guiding in more parts of the country and to improve the qualitative and quantitative growth of the Guiding in India. Group Discussion was held on various subjects for the development of Guiding.

Smt. Vijayalakshmi Viswanathan, Deputy Chief Commissioner (G) and the Financial Commissioner, Railway Board visited Besant Park on 6th June, 2003. Sri T.S. Lucas, Asst. State Commissioner (S) took a session.

An Exhibition was also organised depicting the Growth and the Development of Scouting and Guiding in Karnataka since its inception and also exihibition about Facets of BP's Ripe prepared by Sri R.S. Abharson.



Dr. M. Muniyamma, Former Vice-Chancellor, Gulbarga University inaugurating the Meet. Sri L.M. Jain, National Commissioner, Sri Kondajji B. Shanmukhappa, SCC, Karnataka, Smt. Shobhatai S. Potdukhe, CC(G) & Smt. M. Shanthimathi, JSS(G) are also seen.

# NEWS




## Governor calls for more support to Scouts

By Our Staff Reporter

BANGALORE, JUNE 19. The Governor, T.N.Chaturvedi, on Thursday called for active involvement of elected representatives in the Bharat Scouts and Guides movement in the State.

He appealed to MPs, MLAs, corporators, and members of zilla and taluk panchayats to support the movement, as this was a non-political movement.

"The Scouts and Guides movement is doing yeoman service in inculcating discipl... among students. The el... representatives have a so... sponsibility and s... ould... pate in pop... movement," he...

Citing the exa... MP, P.Selvie Da... panchayat mer... pal, who wer... movement, ... the elect... should er... He wa... financ... move... Dev...

## DECCAN HERALD

## Role of elected bodies in helping scouts' movement stressed

DH News Service

BANGALORE, June 19

Governor T N Chaturvedi today laid emphasis on the role of the elected bodies in the growth of the Bharat Scouts and Guides movement.

The Scouts and Guides, one of the biggest voluntary youth movements, is a vital link between the community and its elected representatives, the Governor noted.

Chief Minister S M Krishna, who is also President of the Bharat Scouts and Guides, Karnataka received the Silver Elephant award hoped that Scouts and Guides movement would go on to become 'an integral part of our education system.'

## THE TIMES OF INDIA

## 'Scouts need our support'

TIMES NEWS NETWORK

Governor T.N. Chaturvedi on ...horted people's representa... ...ort the Scouts and Guides ...ch links the community and

Chief minister S.M. Krishna, who received the silver elephant award for supporting the movement, said Bharat Scouts and Guides is doing yeoman service in ...hannelising the country's youth for con...tive activities.

## THE ASIAN AGE

## CM gets Silver Elephant award

By Our Correspondent

Bangalore, June 19: Governor T.N. Chaturvedi presented the "Silver Elephant Award" to chief minister S.M. Krishna at Raj Bhavan on Thursday, on behalf of the Bharat Scouts and Guides of Karnataka. The Silver Elephant award is the highest honour conferred by the Bharat Scouts and Guides. Mr Krishna, after accepting the award, said, "The role of a scout or guide in this nation is immeasurable. Since I was a scout in my school days, I am honoured to be given this award." Mr Krishna, however, left early due to a prior appointment at a Cabinet meeting.

Mr Chaturvedi officially released the log book for Guides and the book "Youth in the Nation Building Mission." He then presented the Chaturtha Charan, Heerak Pankh, Rajya Puraskar and Nipun awards to Cubs, Bulbuls, Scouts, Guides, Rovers and Rangers.

Addressing the gathering, Mr Chaturvedi said that it was the responsibility of the local governmental institutions to work towards achieving the goal of reaching a head count of 4 lakhs among the Bharat Scouts and Guides.

He said that the funds at the disposal of the Deputy Commissioner could be well utilised for the betterment of the scouts and guides movement.

He added, "The scout and guide movement and its work is commendable as it establishes a strong link between the community and the elected representatives of the movement. This movement is important in instilling discipline, in uniting the country and in participating in acts of social service."



पत्रिका

स्काउट्स व गाइड्स आन्दोलन को प्रोत्साहित करने की जरूरत : चतुर्वेदी

बंगलौर, 19 जून

[का.स.]



Image & Visibility of Scouting/Guiding in the News

# ಶಿವಮೊಗ್ಗ ಜಿಲ್ಲೆ

ಶಿವಮೊಗ್ಗ ಜಿಲ್ಲೆ ಸ್ಥಳೀಯ ಆಶ್ರಯದಲ್ಲಿ ದಿನಾಂಕ 13.06.03 ರಂದು ಎಸ್.ಡಿ.ಎಂ.ಸಿ. ಸದಸ್ಯರು, ಸರ್ಕಾರಿ, ಅನುದಾನಿತ, ಅನುದಾನರಹಿತ ಶಾಲಾ-ಕಾಲೇಜುಗಳ ಮುಖ್ಯಸ್ಥರಿಗೆ 1 ದಿನದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಾಹಿತಿ ಶಿಬಿರವನ್ನು ಏರ್ಪಡಿಸಲಾಗಿತ್ತು.

ಶ್ರೀ ಚಿನ್ನಸ್ವಾಮಿರೆಡ್ಡಿ ಎಲ್‌ಟಿ(ಎಸ್), ರಾಜ್ಯ ಕಾರ್ಯದರ್ಶಿ ಇವರು ನಾಯಕರಾಗಿ ಶ್ರೀ ಟಿ.ಎ. ಮಂಜುನಾಥಾಚಾರ್, ಎ.ಎಸ್.ಓ.ಸಿ., ಶ್ರೀ ಜಯಾಚಾರ್, ಡಿ.ಓ.ಸಿ. ಮತ್ತು ಶ್ರೀ ಟಿ.ಎ. ಸುಬ್ರಹ್ಮಣ್ಯಂ ಎ.ಎಲ್.ಟಿ(ಎಸ್) ರವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. 95 ಮಂದಿ ಅಭ್ಯರ್ಥಿಗಳು ಪಾಲ್ಗೊಂಡಿದ್ದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಶಾಸ್ತ್ರಿ, ಜಿಲ್ಲಾಆಯುಕ್ತರಾದ ಪ್ರೊ. ಎ.ಎಸ್. ಚಂದ್ರಶೇಖರ್, ಶ್ರೀಮತಿ ಭಾರತಿ ಚಂದ್ರಶೇಖರ್ ಹಾಗೂ ಸ್ಕೌಟ್‌ಗಳಾದ ಶ್ರೀ ಹೆಚ್. ದತ್ತಾತ್ರಿ, ಶ್ರೀ ರಾಮಚಂದ್ರಶಾಸ್ತ್ರಿ, ಬಿಂದುಕುಮಾರ್ ಉಪಸ್ಥಿತರಿದ್ದರು. ಶ್ರೀ ಹೆಚ್.ಆರ್. ಉಮೇಶ್ ಆರಾಧ್ಯ, ಸ್ಥಳೀಯ ಸಂಸ್ಥೆ, ಶಿವಮೊಗ್ಗ ಇದರ ಕಾರ್ಯಾಧ್ಯಕ್ಷರು, ಮತ್ತು ಶ್ರೀ ವೈ.ಆರ್. ವೀರೇಶಪ್ಪ, ಕಾರ್ಯದರ್ಶಿಗಳು ಪಾಲ್ಗೊಂಡಿದ್ದರು.



ಶಿವಮೊಗ್ಗದಲ್ಲಿ ಭಾರತ್ ಸ್ಕೌಟ್ಸ್ ಗೈಡ್ಸ್ ಸ್ಥಳೀಯ ಸಂಸ್ಥೆಯು ಶುಕ್ರವಾರ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿ ರೆಡ್ಡಿ ಅವರನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಎಚ್.ಆರ್. ಉಮೇಶ್ ಆರಾಧ್ಯ, ಕಾರ್ಯದರ್ಶಿ ವೈ.ಆರ್. ವೀರೇಶಪ್ಪ, ಸ್ಕೌಟ್ಸ್ ಜಿಲ್ಲಾ ಆಯುಕ್ತ ಪ್ರೊ. ಎ.ಎಸ್. ಚಂದ್ರಶೇಖರ್, ರಾಮಚಂದ್ರ ಶಾಸ್ತ್ರಿ ಅವರು ಸನ್ಮಾನಿಸಿದರು.

# ಬೆಂಗಳೂರು ದಕ್ಷಿಣ ಜಿಲ್ಲೆ

## ಅಭಿನಂದನೆಗಳು

*ಬೆಂಗಳೂರಿನ 15 ನೆಯ ಕಂಠೀರವದ ಸ್ಕೌಟ್ ದಳಕ್ಕೆ ಸೇರಿದ ರಾಷ್ಟ್ರಪತಿ ಸ್ಕೌಟ್ ಶ್ರೀ ಕಾರ್ತಿಕ್‌ಕುಮಾರ್. ಎ. ಆರ್. ಅವರು ಕಳೆದ ಏಪ್ರಿಲ್‌ನಲ್ಲಿ ನಡೆದ ದ್ವಿತೀಯ ಪದವಿ ಪೂರ್ವ ಪರೀಕ್ಷೆಯಲ್ಲಿ ಶೇಕಡ 90.35 ರಷ್ಟು ಅಂಕಗಳನ್ನು ಗಳಿಸಿದ್ದಾರೆ.*



# ಕೊಡಗು ಜಿಲ್ಲೆ



ದಿನಾಂಕ 26-05-03 ರಂದು ಕೊಡಗು ಜಿಲ್ಲೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ನಡೆದ ದೀಕ್ಷಾ ಸಮಾರಂಭದಲ್ಲಿ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಶ್ರೀಕಾಂತ್ ವಾಲಗದ್, ಜಿಲ್ಲಾಧಿಕಾರಿ ಮತ್ತು ಅಧ್ಯಕ್ಷರು, ಜಿಲ್ಲಾ ಸಂಸ್ಥೆ ಅವರನ್ನು ಅಭಿನಂದಿಸುತ್ತಿರುವುದು. ಚಿತ್ರದಲ್ಲಿ ಶ್ರೀಯುತ್ ಕೆ.ಸಿ. ನಾಣಯ್ಯ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎಂ.ಕೆ. ಬಲದೇವಕೃಷ್ಣ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ ಮತ್ತು ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ಶ್ರೀ ಕೆ.ಎ. ಸೋಮಣ್ಣ, ಪೋಷಕರು, ಜಿಲ್ಲಾ ಸಂಸ್ಥೆ ಮತ್ತು ಶ್ರೀಮತಿ ಸಿ.ಎ. ಮೀನಾಕ್ಷಿ, ಜಿಲ್ಲಾ ಮುಖ್ಯ ಆಯುಕ್ತರು, ಇವರುಗಳನ್ನು ಕಾಣಬಹುದು.

## ಸ್ಕೌಟ್ / ಗೈಡ್ ಎಂದರೆ .....

- ಜೀವನ ಶಿಕ್ಷಣ
- ಒಂದು ಯುವಜನ ಚಳವಳಿ
- ಅಂತಾರಾಷ್ಟ್ರೀಯ
- ಬೆಳೆಯುತ್ತಿದೆ
- ಎಲ್ಲರಿಗೂ ಮುಕ್ತ
- ಉದ್ದೇಶಪೂರ್ಣ ವಿನೋದ
- ವಯಸ್ಕರಿಗೆ ಒಂದು ಸವಾಲು
- ಸ್ವಪ್ರೇರಿತ

- ರಾಜಕೀಯೇತರ
- ವೈಯಕ್ತಿಕ ಬದ್ಧತೆ
- ಮಾಡುತ್ತಾ ಕಲಿಯುವುದು
- ಸಣ್ಣತಂಡಗಳಲ್ಲಿ ಕೆಲಸ ಮಾಡುವುದು
- ಉತ್ತೇಜಕ ಕಾರ್ಯಕ್ರಮಗಳು
- ಒಂದು ಜೀವನಸಂಹಿತೆ
- ಒಂದು ಆಧ್ಯಾತ್ಮಿಕ ಆಯಾಮ
- ಒಂದು ಸಾಮಾಜಿಕ ಆಯಾಮ
- ಒಂದು ವೈಯಕ್ತಿಕ ಆಯಾಮ

# His Excellency The Governor of Karnataka Honoured the State Awardees at Raj Bhavan




***Sri H.M. Siddarama Swamy***
Best L.A
Gangavathi,Koppal

***Sri Gopal Rao***
Best Open Unit
Gulbarga

***Sri G.N. Krishnamurthy***
Veteran Scouter
Raichur

***Smt Grace Padma***
Veteran Guider
Bellary



***Smt K.S. Kamalamma***
Veteran Guider
Tumkur

***Sri Sudarshan Naik***
Best L.A
Kadiyali, Udupi

***Sri B.K. Ajay Kumar Jain***
Best Open Unit
Mysore City

***Sri Boliyanna Ballal***
Veteran Scouter
Dakshina Kannada



***Sr Cynthiya***
Veteran Guider
Chikmagalur

***Sri M.S. Hiremutt***
Best L.A
Gadag

***Sri S.S. Nimbal***
Veteran Scouter
Bijapur

**Smt Lakshmi Bai Mangi**
Veteran Guider
Belgaum



## 100 — 2007

A Hundred years of Promise
in 2007, Scouting will celebrate its Centenary

ನನ್ನ ಜೀವನದ ಮೇಲೆ ವಿಶೇಷವಾಗಿ ವಿದ್ಯಾರ್ಥಿ ದಿಶೆಯಲ್ಲಿ ಅಚ್ಚಳಿಯದ ಪ್ರಭಾವವನ್ನು ಈ ಚಳುವಳಿ ಬೀರಿತ್ತು. ಜೀವನದಲ್ಲಿ ಶ್ರದ್ಧೆ, ಪ್ರೀತಿ, ಸಾಹಸಪ್ರಿಯತೆ, ಕ್ರಿಯಾಶೀಲತೆ ಮತ್ತು ಕ್ರೀಡಾ ಮನೋಭಾವ ರೂಪಿಸಬಲ್ಲ ಸಾಮರ್ಥ್ಯ ಈ ಚಳುವಳಿಗಿರುವುದನ್ನು ಸ್ವಾನುಭವದಿಂದ ಬಲ್ಲೆ.

– ಶ್ರೀ ಎಸ್.ಎಂ. ಕೃಷ್ಣ
ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

Regd as News Paper (Magazine) No : **CPMG/KA/BGW-549/2002-05**




BOOK-POST

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.